# ಕರ್ನಾಟಕ ವಿಧಾನ ಪರಿಷತ್ತು

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1441 (1193)
2. ಸದಸ್ಯರ ಹೆಸರು : ಶ್ರೀ ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು )
3. ಉತ್ತರಿಸುವ ದಿನಾಂಕ : 23-09-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ಸರ್ಕಾರವು ಕೆ.ಎ.ಎಸ್., ಗೆಜೆಟೆಡ್ ಪ್ರೊಬೇಷನರಿ ಅಧಿಕಾರಿಗಳ ಕೊರತೆಯನ್ನು ಎದುರಿಸುತ್ತಿರುವುದು ಹಾಗೂ ಈ ಕೊರತೆಯು ಆಡಳಿತದ ಮೇಲೆ ಪರಿಣಾಮ ಬೀರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಖಾಲಿಯಿರುವ ಕೆ.ಎ.ಎಸ್., ಹುದ್ದೆಗಳ ನೇಮಕಾತಿಯನ್ನು ಮಾಡಿಕೊಳ್ಳಲು ಸರ್ಕಾರ ಕೈಗೊಂಡ ಕ್ರಮಗಳೇನು; | ಹೌದು.<br><br>ಗೆಜೆಟೆಡ್ ಪ್ರೊಬೇಷನರ್ಸ್ ಪರೀಕ್ಷೆಯನ್ನು ಪ್ರತಿ ವರ್ಷ ನಡೆಸುವ ಬಗ್ಗೆ ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು, 1997ರ ನಿಯಮ 4ಕ್ಕೆ ದಿನಾಂಕ: 30.05.2019 ರಂದು ತಿದ್ದುಪಡಿ ಮಾಡಲಾಗಿದೆ. ಅದರಂತೆ ಖಾಲಿಯಿರುವ ಹುದ್ದೆಗಳನ್ನು ತುಂಬಲು ಆಡಳಿತ ಇಲಾಖೆಯಿಂದ ಮಾಹಿತಿಯನ್ನು ಪಡೆದು ಕಾಲಕಾಲಕ್ಕೆ ಕ್ರಮಕೈಗೊಳ್ಳಲಾಗುತ್ತಿದೆ. |
| ಆ | ರಾಜ್ಯದಲ್ಲಿ ಖಾಲಿಯಿರುವ ಇಲಾಖಾವಾರು KAS-GP ಹುದ್ದೆಗಳು ಎಷ್ಟು; (ಸಂಪೂರ್ಣ ಮಾಹಿತಿಯನ್ನು ನೀಡುವುದು) ಹಾಗೂ ಯಾವ ಕಾಲಮಿತಿಯೊಳಗೆ ಈ ಹುದ್ದೆಗಳನ್ನು ನೇಮಕ ಮಾಡಿಕೊಳ್ಳಲಾಗುತ್ತದೆ; | ಕೆ.ಎ.ಎಸ್ (ಕಿ.ಶ್ರೇ) ವೃಂದದ ನೇರ ನೇಮಕಾತಿ ಕೋಟಾದಡಿ 45 ಹುದ್ದೆಗಳು ಖಾಲಿ ಇರುತ್ತವೆ; ನೇರ ನೇಮಕಾತಿ ಹುದ್ದೆ ಬಿಡುಗಡೆ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |
| ಇ | ಕರ್ನಾಟಕ ಲೋಕಸೇವಾ ಆಯೋಗವು ಪ್ರತಿಬಾರಿ ಕೆ.ಎ.ಎಸ್., ಹುದ್ದೆಗಳ ನೇಮಕಾತಿಗಳನ್ನು ಪೂರ್ಣಗೊಳಿಸಲು ಎರಡು-ಮೂರು ವರ್ಷಗಳನ್ನು ತೆಗೆದುಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ವಿಳಂಬ ನೀತಿಗೆ ಕಾರಣವೇನು; (ಸ್ಪಷ್ಟವಾದ ಮಾಹಿತಿಯನ್ನು ಒದಗಿಸುವುದು) | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ,<br>1) ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು, 1997ರನ್ವಯ ಸದರಿ ನೇಮಕಾತಿಯನ್ನು ಪೂರ್ವಭಾವಿ ಪರೀಕ್ಷೆ, ಮುಖ್ಯ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆ ಎಂದು ಮೂರು ಹಂತಗಳಲ್ಲಿ ನಡೆಸಲಾಗುತ್ತಿರುವುದರಿಂದ ಸಮಯಾವಕಾಶ ಬೇಕಿರುತ್ತದೆ.<br>2) ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗ ಹರಡುತ್ತಿರುವ ಕಾರಣದಿಂದ ದೇಶದಾದ್ಯಂತ ಹಲವು ದಿನಗಳವರೆಗೆ ಲಾಕ್‌ಡೌನ್ ಜಾರಿಯಲ್ಲಿದ್ದರಿಂದ ನೇಮಕಾತಿ ವಿಳಂಬವಾಗಿರುತ್ತದೆ.<br>3) ದಿನಾಂಕ: 16.12.2016ರ ಸರ್ಕಾರದ ಅಧಿಸೂಚನೆಯನ್ವಯ ಪ್ರತಿ ಸಮಿತಿಯಲ್ಲಿ ದಿನವೊಂದಕ್ಕೆ ಕೇವಲ 09 (ಬೆಳಿಗ್ಗೆ 05 ಮತ್ತು ಮಧ್ಯಾಹ್ನ 04) ಅಭ್ಯರ್ಥಿಗಳಿಗೆ ಸೀಮಿತವಾಗಿ ಸಂದರ್ಶನ ನಡೆಸಬೇಕಿರುವ ಹಿನ್ನೆಲೆಯಲ್ಲಿ ವ್ಯಕ್ತಿತ್ವ ಪರೀಕ್ಷೆಯನ್ನು ಪೂರ್ಣಗೊಳಿಸಲು ಹೆಚ್ಚಿನ ಸಮಯಾವಕಾಶ ಬೇಕಿರುತ್ತದೆ. |

| | | |
|---|---|---|
| ಈ | KPSCಯು ಯಾವುದೇ ನೇಮಕಾತಿಯನ್ನು ಮಾಡಿಕೊಳ್ಳುವಾಗ ಎಲ್ಲಾ ಪರೀಕ್ಷೆಗಳ ನೇಮಕಾತಿಗಾಗಿ ವಿಳಂಬ ಮಾಡುತ್ತಿದ್ದು, ಆಯೋಗವು ತಜ್ಞ ಮೌಲ್ಯಮಾಪಕರ ಕೊರತೆಯನ್ನು ಎದುರಿಸುತ್ತಿದೆಯೇ? (ಪೂರ್ಣವಾದ ಮಾಹಿತಿಯನ್ನು ನೀಡುವುದು) | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ : ಹೌದು.<br><br>ಕರ್ನಾಟಕ ಲೋಕಸೇವಾ ಆಯೋಗದಿಂದ ನಡೆಸಲಾದ ಸ್ಪರ್ಧಾತ್ಮಕ ಪರೀಕ್ಷೆಗೆ ಸಂಬಂಧಿಸಿದಂತೆ ವಿವಿಧ ವಿಷಯಗಳ ವಿವರಣಾತ್ಮಕ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯಕ್ಕೆ ಮೌಲ್ಯಮಾಪಕರನ್ನು ನೇಮಕಗೊಳಿಸಲು ಎಲ್ಲಾ ವಿಶ್ವವಿದ್ಯಾಲಯಗಳಿಂದ ಮೌಲ್ಯಮಾಪಕರ ಪಟ್ಟಿಯಿಂದ 10 ವರ್ಷಗಳ ಸೇವಾನುಭವವುಳ್ಳ ಮೌಲ್ಯಮಾಪಕರ ಅವಶ್ಯಕತೆ ಇರುತ್ತದೆ.<br><br>ಆಯೋಗದಿಂದ ಎಲ್ಲಾ ವಿಶ್ವವಿದ್ಯಾಲಯಗಳು ಹಾಗೂ ಪದವಿ ಕಾಲೇಜುಗಳಿಂದ ಉಪನ್ಯಾಸಕರ ಪಟ್ಟಿಯನ್ನು ಕೋರಿದ್ದರೂ ಸಹ ಸಕಾಲದಲ್ಲಿ ಸದರಿ ಪಟ್ಟಿಯನ್ನು ನೀಡುತ್ತಿಲ್ಲವಾದ್ದರಿಂದ ಹಾಗೂ ನಿಯೋಜಸಿದ ಸಂಖ್ಯೆಯಲ್ಲಿ ಮೌಲ್ಯಮಾಪಕರು ಹಾಜರಾಗದೇ ಇರುವುದರಿಂದ ಮೌಲ್ಯಮಾಪನ ಪ್ರಕ್ರಿಯೆಯಲ್ಲಿ ವಿಳಂಬವಾಗುತ್ತಿದೆ. |

ಸಂಖ್ಯೆ: ಸಿಆಸುಇ 97 ಎಸ್ಎಸ್‌ಸಿ 2021

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ.